ಕವನ ಸಂಕಲನ

# ಈ ಕಾವ್ಯಗಳು

ಎನ್. ಎಂ. ಕೊಟ್ರೇಶ್



ಶ್ರೀಹರ್ಷ ಪ್ರಕಾಶನ, ಕೊಟ್ಟೂರು.
ಅಕ್ಟೋಬರ್ 1984

YEE KAAVYAGALU : A Collections of Kannada Poems by N. M. Kotresh, Published by Sriharsha Prakashana, Kottur Bellary(Dist) Printed at Sri Prakash Printers, Huvinahadagalli Bellary (Dist)

Price : Rs. **7-00**







ಮುಖಪುಟ ವಿನ್ಯಾಸ : ಎಂ. ಟಿ. ವೇದಮೂರ್ತಿ

ಬೆಲೆ : ಏಳು ರೂಪಾಯಿಗಳು

ಶ್ರೀ ಪ್ರಕಾಶ್ ಪ್ರಿಂಟರ್ಸ್, ಹಡಗಲಿ

# ನನ್ನ ಮಾತು

ಜೀವ ತುಂಬಿಕೊಂಡು ಪಿಳಿ ಪಿಳಿ ಕಣ್ಣು ಬಿಡುವ ಇದು ನನ್ನ ಮೊದಲನೇ ಕೃತಿ.

**"ಈ ಕಾವ್ಯಗಳು"** ಆತ್ಮಾನಂದಕ್ಕಾಗಿ ಬರೆದವುಗಳಲ್ಲ. ಅಸಮಾನತೆಯ ಪರಿಸರದಲ್ಲಿ, ನೋವಿನ ಬದುಕುಗಳಲ್ಲಿ ಕಂಡುಂಡ ಅನುಭವಗಳೇ ಈ ಮೂಸೆಯಲ್ಲಿ ಹುಟ್ಟಿ ದನಿಎತ್ತಿವೆ.

ಶೋಷಣೆಯಲ್ಲಿ ತತ್ತರಿಸುತ್ತಿರುವವರ ಬದುಕನ್ನ ಉತ್ತಮಗೊಳಿಸುವುದಕ್ಕಾಗಿಯೇ ಸಾಹಿತ್ಯ ಒಂದು ಸಂವೇದನಾಶೀಲ ಮಾಧ್ಯಮವಾಗಬೇಕು. ಬದ್ಧ ಸಾಹಿತಿಗೆ ಇದು ಅನಿವಾರ್ಯಕೂಡಾ. ಪ್ರಕೃತಿಯ ಆರಾಧನೆ ಕಣ್ಣೀರನ್ನ ಒರೆಸಲಾರದು.

ಈ ವ್ಯವಸ್ಥೆ ಬದಲಾಗಲೇಬೇಕು ಎನ್ನುವ ಸಮಕಾಲೀನ ಪ್ರಜ್ಞೆಯುಳ್ಳ ಪ್ರತಿಯೊಬ್ಬ ಸಾಹಿತಿ ಅನ್ಯಾಯ, ಅಸಮಾನತೆ, ಅತ್ಯಾಚಾರ, ಕ್ರೂರ ಜಾತಿ ಪದ್ಧತಿ ಮುಂತಾದವುಗಳ ವಿರುದ್ಧ ತನ್ನ ಬರಹದ ಮೂಲಕ ಬಂಡೇಳುವುದು ಸಹಜ, ಅಷ್ಟೇ ಅಲ್ಲ ಬರಹವನ್ನ ಮೀರಿನಿಲ್ಲುವ ಬದುಕಿನಲ್ಲಿಯೂ ಸಹಿತ.

ಈ ಸಾಮಾಜಿಕ ವ್ಯವಸ್ಥೆಯಬಗ್ಗೆ ಕಳಕಳಿಯುಳ್ಳ ಎಲ್ಲರ ಮುಂದೆ ನನ್ನ ಕೃತಿಯನ್ನ ಇಡುತ್ತೇನೆ.

ಓದುಗರು ವಿಮರ್ಶೆಮಾಡಿ ನನ್ನ ವಿಳಾಸಕ್ಕೆ ಬರೆದರೆ ನಾನು ಬರೆದದ್ದು ಸ್ವಲ್ಪ ಸಾರ್ಥಕವಾಗಬಹುದು.

ಈ ಕವನ ಸಂಕಲನವನ್ನ ಹೊರತಂದ ಶ್ರೀಹರ್ಷ ಪ್ರಕಾಶನದವರಿಗೂ

ಎಲ್ಲಾ ರೀತಿಯ ಸಲಹೆ ಸಹಕಾರಗಳನ್ನ ನೀಡಿದ ಸ್ನೇಹಿತರಾದ ಎಸ್. ಎಸ್. ಹಿರೇಮಠ, ಬಾಚಿಗೊಂಡನಹಳ್ಳಿ ವಿರುಪಾಕ್ಷಗೌಡರು ಮತ್ತು ಹೆಚ್. ಶೇಷಗಿರಿರಾವ್ ಇವರಿಗೂ,

ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಪ್ರಕಾಶ್ ಪ್ರಿಂಟರ್ಸ್‌ನವರಿಗೂ,

ಸುಂದರವಾದ ರಕ್ಷಾಚಿತ್ರ ಬರೆದುಕೊಟ್ಟ ಎಂ. ಟಿ. ವೇದಮೂರ್ತಿಯವರಿಗೂ,

**ಕೃತಜ್ಞತೆಗಳು**

ಸತ್ಯನಾರಾಯಣಶೆಟ್ಟಿ ಕಾಂಪೌಂಡ್
ಪ್ರವಾಸಿ ಮಂದಿರದ ಎದುರುಗಡೆ,
ಹೂವಿನಹಡಗಲಿ, ಬಳ್ಳಾರಿ (ಜಿಲ್ಲೆ).

**ಎನ್. ಎಂ. ಕೊಟ್ರೇಶ್,**

## ಅರ್ಪಣೆ:

ಬೆವರಿನ ಹಗಲುಗಳಲ್ಲಿ
ಕಣ್ಣೀರಿನ ರಾತ್ರಿಗಳಲ್ಲಿ
ಕೊರಗುವ ನನ್ನ ಜನಕ್ಕೆ

ಈ ಲೇಖಕರ ಮುಂದಿನ ಕೃತಿ

**ಕೊರಳೆತ್ತಿದ ಧ್ವನಿಗಳು**

(ಕಥಾ ಸಂಕಲನ)

# ಪರಿವಿಡಿ

## ಈ ಕಾವ್ಯಗಳು

ಈ ಕಾವ್ಯಗಳು
ತುಟಿ–ಸ್ತನ
ಬೆಟ್ಟ–ಮೋಡಗಳೊಂದಿಗೆ
ಮತ್ತು
ಏಕಾಂತದಲ್ಲಿ ಮೈಥುನಿಸಿ
ಗರ್ಭೀಕರಿಸಿದವುಗಳಲ್ಲ.
ಬೆವರಿನ ಹಗಲುಗಳಿಂದ,
ಕಣ್ಣೀರಿನ ರಾತ್ರಿಗಳಿಂದ,
ಬೆಂಕಿಯಲ್ಲಿ ಬೆಂದ
ಬೆಲ್ಚಿಗಳ ಮೈ ಮಾಂಸದಿಂದ,
ಬಲಾತ್ಕಾರಗಳ ರೋಧನಗಳಿಂದ,
ಸನಾತನ ಶ್ರೇಣಿಗಳಲ್ಲಿ
ಸವೆದುಹೋದ ಹೃದಯಗಳಿಂದ............
ಬಸಿರಾಗಿ............ಉಸಿರಾಗಿ............
ಹಸಿರಾಗಿ................
ಹೊಸ ಬಯಕೆಯ ಬಾಣಲೆಯಲ್ಲಿ
ಏಳುವ ಈ ಕಾವ್ಯಗಳು
ಕುದಿಯುವ ಬಿಂದುಗಳು,
ಭರವಸೆಯ ಹೊಸ ದಿಕ್ಸೂಚಿಗಳು.

# ಶಪ್ತೆ

ಎಲ್ಲರೆದುರು ಮದುವೆಯಾಗಿ
ನಿನಗೆ ಹೆಂಡತಿಯಾದಾಗಲೇ
ನಾನೊಂದು ವಸ್ತುವಾಗಿ ಬಿಟ್ಟೆ
ಮಾರುಕಟ್ಟೆಗೆ ಬಿಟ್ಟ ತರಕಾರಿಯಂತೆ
ತಾಳಿ ಕಟ್ಟಿದಾಕ್ಷಣ ಇದನ್ನ
ಸಂಬಂಧವೆಂದು ಕರೆಯುವರೇ ?
ನೋಡು ಈ ಚಿನ್ನಕ್ಕೆ ತುಕ್ಕು ಹಿಡಿದಿದೆ
ಪ್ರೇಮಕ್ಕೆ ತಾಳಿಯು ಗಂಟೇ ಬೇಕೇ
ಹೇಳು ಗೆಳೆಯಾ...............
ನೂರು ಆಸೆಗಳಿಂದ ಅರಳಿ
ವಿರಹದಲ್ಲಿ ಬಾಡಿ ಹೋಗಿದೆ,
ನಿನ್ನ ಮನ ಪ್ರೇಮ ಭಿಕ್ಷೆಯು
ಸುತ್ತಿಗೆಗೆ ಸೀಳದ ಬಂಡೆಯಾಗಿದೆ,
ಕಾವಿಗೆ ಕರಗದ ಕಬ್ಬಿಣವಾಗಿದೆ.
ಮೌನ ಈ ನಿರಾಸೆಯು ಮನಕ್ಕೆ
ಕಪ್ಪು ಕನ್ನಡಿ ಹಿಡಿದಿದೆ.
ಸುಪ್ತ ಬಯಕೆಗಳೆಲ್ಲಾ ಗೋರಿಯಾಗಿ ಹೋಗಿವೆ.
ನೀ ತೊರೆದಂದೇ ಈ ಕರಿಮಣಿಯ ಹೆಣ್ಣು
ವಿಧವೆಯಾಗಿ ಹೋಗಿದ್ದಾಳೆ...............
ಸೆನಪಿಲ್ಲದ ದಿನಗಳಿಂದ ತೋಯುತ್ತಿದ್ದ
ಕಣ್ಣ ಸೆಲೆ ಬತ್ತಿ ಹೋಗಿದೆ.
ನಿನಗಾಗಿ ಕಾಯುತ್ತಿದ್ದ ದಿನಗಳೆಲ್ಲಾ
ಈಗ ಕಣ್ಣೀರಿನ ಚರಿತ್ರೆಯಾಗಿದೆ.
ನಾಳಿನ ಬದುಕು ನನಗೆ ಹೊಸ ಅಧ್ಯಾಯಗಳು.
ಬೇಸತ್ತ ಮನ ಇನ್ನು ಕಾಯಲಾರದು ಗೆಳೆಯಾ
ದುರಂತವೆಂದೂ ಉತ್ತರವಾಗಲಾರದು
ಬಾಡುವ ಮುನ್ನ ಹೊಸ ನೀರ ಬಯಸುತ್ತದೆ
ಈ ಬಳ್ಳಿ.

# ನಿರೀಕ್ಷೆ

ನಿಮ್ಮ ಎಂಜಲು ಎಲೆಗಳಿಗಾಗಿ
ಕಾದು ನಿಂತು ಅಗುಳು ಅಗುಳನ್ನ
ನೆಕ್ಕುವಾಗ ಅಸಹ್ಯಪಟ್ಟು
ಆಚೆ ಮುಖ ತಿರುಗಿಸಿಕೊಂಡಾಗ
ನಾವು ಹಸಿವಿನಲ್ಲಿ ನಾಚಿಕೆಯನ್ನೇ ಮರೆತಿರುತ್ತೇವೆ.
ನಿಮ್ಮ ಸಾವಿರ ಎಕರೆ ಹೊಲದಲ್ಲಿ
ಕೂಲಿ ಕೊಡದೇ ದುಡಿಸಿಕೊಳ್ಳುವಾಗ
ಹೋರಾಡಿ ಸತ್ತ ನಮ್ಮ ಹೆಣಗಳನ್ನು
ಹೂಳಿಡಲು ಮೂರಡಿ ಜಾಗ ಹುಡುಕುತ್ತಿರುತ್ತೇವೆ.
ಪಳಪಳ ಮಿಂಚುವ ರೇಷ್ಮೆ
ಉಡುಪುಗಳಲ್ಲಿ ನಿಮ್ಮ ಹೆಂಡರು-ಮಕ್ಕಳು
ಕಿಲಕಿಲ ನಗುವಾಗ ನಮ್ಮ ಕಣ್ಣೀರುಗಳು
ಕತ್ತಲೆಯಲ್ಲೇ ಮೂಡಿ ಬರುವ ಹೊಸ
ಚುಕ್ಕೆಗಳನ್ನ ಸ್ವಾಗತಿಸಲು ಕಾಯುತ್ತಿರುತ್ತೇವೆ.
ನೀವೆಲ್ಲಾ ಬೆಚ್ಚಗೆ ಹೊದ್ದು ನಿಶೆಯಲ್ಲಿ
ಬೆದಿ ನಾಯಿಗಳಂತೆ 'ಕಿಸಕ್' ಎನಿಸುವಾಗ
ಬೀದಿಗಳಲ್ಲಿ ಚಳಿ ಹಿಡಿದು ನಿದ್ರೆಯಿಲ್ಲದೇ
ಮಲಗಿದ ನಮ್ಮ ರಾತ್ರಿಗಳು ಸೂರ್ಯನ
ಆಗಮನವನ್ನು ಎದುರು ನೋಡುತ್ತಿರುತ್ತವೆ.
ಸ್ವೇಚ್ಛಾ ಸುಖದ ಅಟ್ಟಹಾಸಗಳಿಗೆ
ದುಃಖ, ನೋವುಗಳು ಸದಾ ವೈರಿಗಳೇ............
ನಿರಂತರವಾಗಿ ಹುಟ್ಟಿ ಬರುವ ನಾಳೆಗಳು ಒಂದು ದಿನ
ಈ ನೆಲದಲ್ಲಿ ಹೊಸ ಪುಟಗಳನ್ನ ಬರೆಯಲಿವೆ.

# ನಿಮ್ಮೊಂದಿಗೆ

ನಿಮ್ಮೊಂದಿಗೆ,
ಹೆಂಟೆ ಕೀಳುವ ನಿಮ್ಮ
ರಂಟೆಗಳೊಂದಿಗೆ
ಗಣಿ ಕಡಿಯುವ ಹಾರೆ-ಪಿಕಾಸೆಗಳೊಂದಿಗೆ
ಪಿಚ್ಚುಗಣ್ಣಿನ ಮುದುಕ
ಮುದುಕಿಯರೊಂದಿಗೆ
ಪಾರ್ಶ್ವವಾಯುವಿಗೆ ತುತ್ತಾದ
ಹಳ್ಳಿ ನಗರಗಳನ್ನು ಮಾತನಾಡಿಸುತ್ತೇನೆ.
ನಿರಂತರ ಮೌನಕ್ಕೆ
ಕತ್ತಲೆಯ ದಾರಿಗೆ
ದೀಪ ಹಾಕಿ ತೋರಿಸುತ್ತೇನೆ.
ಈ ಫ್ಯಾಸಿಸ್ಟರ, ಬೂರ್ಜ್ವಾಗಳ
ಬಂಡವಾಳವನ್ನ ಕಾಣುವಂತೆ
ಬಯಲು ಮಾಡುತ್ತೇನೆ:
ತೂತು ತೂತಾದ ನಿಮ್ಮ
ಹೃದಯಗಳು ನಿರಾಸೆಯನ್ನ ತುಂಬಿಕೊಂಡಿವೆ
ನನಗೂ ಗೊತ್ತು
ಬಹುಶಃ
ನನ್ನ ಜೊತೆ ಬಂದವರಿಗೆ
ಜೊತೆಯಾಗುತ್ತೇನೆ
ಈ ಬೆಂಕಿ ಬಿರುಗಾಳಿಗಳ ವಿರುದ್ಧ ಈಜಲು............
ಅವರು
ಸಾಕಿದ ಬಂದೂಕುಗಳು ನಮ್ಮೆಲ್ಲರ
ರಕ್ತ ನೆಕ್ಕಲು ಬರಬಹುದು
ನನಗೂ ನನ್ನ ಕಾವ್ಯಕ್ಕೂ ಬೆಂಕಿ ಹಚ್ಚಿ
ಮೈ ನಡುಕವನ್ನ ಕಳೆದುಕೊಳ್ಳಲು
ಮುಂದಾಗಲೂಬಹುದು
ಆದರೆ ಚರಿತ್ರೆಯಲ್ಲಿ ಇದು ವ್ಯರ್ಥವಾಗಿದೆ.
ವರ್ತಮಾನ ಇದನ್ನ ಸಹಿಸುವುದಿಲ್ಲ
ನಾಳೆಗಳು ಒಪ್ಪುವುದೇ ಇಲ್ಲ.

# ಪ್ರವಾಹ

ಭೇದಗಳನ್ನ ಶಾಸ್ತ್ರಗಳೆಂದು ರಚಿಸಿ
ವರ್ಣಗಳನ್ನ ಧರ್ಮಗಳೆಂದು ಸಾರಿ
ಕ್ಲೇಶ, ಕ್ಷೋಭೆಗಳ ಸಂಸ್ಕೃತಿ ಬರೆದು
ವೇದ ಕೇಳಿದ ಕಿವಿಗಳಿಗೆ
ಕಾದ ಸೀಸ ಹಾಕಿದವರು,
ಪಠನ ಮಾಡಿದ ನಾಲಿಗೆಗಳ ಕೊಯ್ದವರು
ಗರ್ಭಿಣಿಯರನ್ನು ಗೂಳಿಗಳಿಂದ
ಸೀಳಿಸಿದವರು ನೀವೇ ಎಂದು ಹೇಳಿದರೆ
ಮೈಗೆ ಬೆಂಕಿ ಹಚ್ಚಿಕೊಂಡವರಂತೆ
ಧಗಧಗ ಉರಿಯುತ್ತೀರೇಕೆ ?
ದುರಂತ ಸಾವುಗಳನ್ನ,
ಮಸಣದ ಬದುಕನ್ನ
ನಿರಂತರ ತಾಳ್ಮೆಯನ್ನ
ಅರಿಯದೇ ಹೋದ ಮತಾಂಧರೆಂದು
ಹೇಳಿದರೆ ವಿಷದ ನಾಗರಗಳಂತೆ
ಕಚ್ಚಬರುತ್ತೀರೇಕೆ ?
ನಾವು ಧರ್ಮಗಳ ಮೀರಿ ನಿಂತಿದ್ದೇವೆ
ಕರ್ಮ ಹಣೆಬರಹಗಳನ್ನ ತುಳಿದು ಬಂದಿದ್ದೇವೆ
ಹನಿಯಾಗಿ, ಹಳ್ಳವಾಗಿ
ನದಿಗಳಾಗಿ ಪ್ರವಾಹವಾಗಿದ್ದೇವೆ
ಯಾವ ಸಂಕುಚಿತ ಒಡ್ಡುಗಳು
ಇದಕ್ಕೆ ಅಡ್ಡ ನಿಲ್ಲಲಾರವು
ಜಿಡ್ಡು ಆದರ್ಶಗಳ ಆಣೆಕಟ್ಟುಗಳಿನ್ನು
ತಡೆದುಕೊಳ್ಳಲಾರವು
ಈ ಭೋರ್ಗರೆವ ಪ್ರವಾಹಕ್ಕೆ
ಮತ್ತಷ್ಟು ನದಿಗಳು
ಇನ್ನಷ್ಟು ಕೋಟಿ ಕೋಟಿ.

# ಪಾಬ್ಲೋ ನೆರೂಡನಿಗಾಗಿ

ರಕ್ತ ಕಣ್ಣೀರುಗಳ ಗಾರೆ ಕಲಸಿ,
ಎಲುಬುಗಳನ್ನು ಸುಟ್ಟು ಇಟ್ಟಿಗೆ
ಮಾಡಿ ಕಟ್ಟಿದ ಸ್ವತಂತ್ರ ಚಿಲಿ
ನುಚ್ಚು ನೂರಾಯಿತು
ಮತ್ತೆ
ಬಂದೂಕುಗಳು ಮನೆ ಮನೆಗೆ ನುಗ್ಗಿ
ಆಗ ತಾನೆ ದಣಿವಾರಿಸಿಕೊಂಡಿದ್ದ
ಕಾರ್ಮಿಕರನ್ನು,
ಆಳು ನಿಲ್ಲಿಸಿದ್ದ ಕಂದಗಳನ್ನ
ಸಿಹಿ ಅಪ್ಪುಗೆಯಲ್ಲಿದ್ದ ಹೆಂಗಸರ ಮಾನವನ್ನ
ಸುಟ್ಟವು
ಅಶಾಂತಿಯ ಧ್ವಜ ಹಾರಿತು............
ನೀನು ಬಳಲಿ ಅಸ್ವಸ್ಥನಾಗಿದ್ದೆ
ಆಸ್ಪತ್ರೆಯೇ ಸೆರೆಮನೆಯಾಗಿತ್ತು
ನೀನು ಹಾಕಿದ ಕಣ್ಣೀರಿನ ಮೇಲೆ
ಆ ಕಟುಕರು ಹಾಲು ಕುಡಿದರು
ನಿನ್ನ ಮನೆ ಮುರಿದು
ಕಾವ್ಯ ರಾಸಿಗೆ ಬೆಂಕಿ ಹಚ್ಚಿ
ಬೂದಿ ತುಳಿದು
ವಿಸ್ಕಿ ಕುಡಿದು ಕೇಕೆ ಹಾಕಿದರು
ನೀನಾಗ ಸ್ಮಶಾನದಲ್ಲಿದ್ದೆ,
ಆ ಮೂರ್ಖರಿಗೇನು ಗೊತ್ತು
ಅಂದೇ ನೀನು ಜಗತ್ತಿನ
ಉದ್ದಗಲವನ್ನ ಆವರಿಸಿಕೊಂಡದ್ದು,
ಕಾವ್ಯಗಳೊಂದಿಗೆ ಮರಳಿ ಬಂದು
ನಮ್ಮ ದಮನಿ ದಮನಿಗಳಲ್ಲಿ ತುಂಬಿಕೊಂಡದ್ದು,
ಅಖಂಡ ಮಾನವ ಪ್ರೇಮದಲ್ಲಿ
ನಮ್ಮ ಕಣ್ಣುಗಳನ್ನ ತೋಯಿಸಿದ್ದು.

## ಗೊಮ್ಮಟಗಳು

ಕ್ಷೀರಾಭಿಷೇಕ ಮಾಡುವ
ಬೊಜ್ಜು ಮೈಯ್ಯ ಭಕ್ತರೇ
ಬನ್ನೀ ನಿಮಗೆಲ್ಲಾ ತೋರಿಸುತ್ತೇನೆ
ಈ ನೆಲದ ಹಾದಿಗಳಲ್ಲಿ
ಬೀದಿ ಪಕ್ಕದ ಗುಡಿಸಲುಗಳಲ್ಲಿ
ಹಾಲು ಕಾಣದೇ ಸಾಲುಗಟ್ಟಿ ನಿಂತ
ರಕ್ತ ಮಾಂಸವಿಲ್ಲದ
ಪುಟ್ಟ ಪುಟ್ಟ ಹಸುಳೆಗಳು
ಎಲುಬಿನ ಗೂಡುಗಳು...........
ನಿರ್ಜೀವ ಗೊಮ್ಮಟನಿಗೆ
ಸಹಸ್ರ, ಸಹಸ್ರ ಕ್ಷೀರ ಕುಂಬಳಗಳನ್ನ
ತುಪ್ಪದ ಬಿಂದಿಗೆಗಳನ್ನ ಎತ್ತಿ ಸುರುವಿ
ಅಭ್ಯಂಗ ಸ್ನಾನ ಮಾಡಿಸುವಾಗ
ಈ ಸಜೀವ ಗೊಮ್ಮಟಗಳು
ಜೊಲ್ಲು ಸುರಿಸಿ ಪಿಳಿ ಪಿಳಿ
ಕಣ್ಣು ಬಿಟ್ಟು ಕೂಗುತ್ತವೆ
ಈ ಅನಾಥ ಗಂಟಲುಗಳಲ್ಲಿ
ಹನಿ ಹಾಲಾದರೂ ಇಳಿಯಲೆಂದು.

## ನಿಲ್ಲಿಸಿ ಕೇಳು

ನಿನ್ನ ಅಂಗ ಸೌಷ್ಠವ ಕಂಡವರು
ಹಸಿವಿನಿಂದಾದ ರಕ್ತಹೀನತೆಯನ್ನೇಕೆ ಕಾಣಲಿಲ್ಲ,
ಕಣ್ಣುಗಳು ಮೋಹಕ, ಮಾದಕವೆಂದು
ಬರೆದವರು ನೋವಿನ ಕಣ್ಣೀರನ್ನೇಕೆ ಬರೆಯಲಿಲ್ಲ,
ಮಾಯೆ, ಚಂಚಲೆ ಎಂದವರು
ಅಚಲ ಮನಸ್ಸಿನ ನಿನ್ನ ತಾಳ್ಮೆಯನ್ನೇಕೆ ಅರಿಯಲಿಲ್ಲ,
ಮುಖವನ್ನು ಕಮಲಕ್ಕೆ ಹೋಲಿಸಿದವರು
ಬೆವರಿನಿಂದಾದ ಕೆಸರಿನ ಬದುಕನ್ನೇಕೆ ನೋಡಲಿಲ್ಲ,
ತೃಷೆ ತೀರಿಸಿಕೊಳ್ಳುವವರು
ರಕ್ತಸ್ರಾವದ ಬಳಲುವಿಕೆಯಲ್ಲೇಕೆ ಭಾಗಿಯಾಗುತ್ತಿಲ್ಲ,
ಶೀಲದ ಹಣೆ ಪಟ್ಟಿ ಹಚ್ಚಿದವರು,
ದೇವರ ಹೆಸರಿನಲ್ಲಿ ಬಸವಿ ಮಾಡಿದವರು,
ವಸ್ತುವಿನಂತೆ ಮಾರಾಟ ಮಾಡಿದವರು,
ಪುರುಷರಂತೆ ಸಮಾನಳೆಂದು ಬರೀ
ಬೊಬ್ಬೆ ಹಾಕಿದವರು....... ........
ಈಗ ಎಲ್ಲಿದ್ದಾರೆ........?
ನಿಲ್ಲಿಸಿ ಕೇಳು !

# ಬಂತು ದೀಪಾವಳಿ

ಬಂತು ದೀಪಾವಳಿ
ನಮ್ಮ ದಿವಾಳಿಯಾದ ಮನೆಗಳಿಗೆ
ಅತಿಥಿಯಂತೆ.
ಹಣತೆಗೆ ಎಣ್ಣೆಯಿಲ್ಲ,
ಹೂರಣಕ್ಕೆ ಬೆಲ್ಲ-ಬೇಳೆಯಿಲ್ಲ,
ಹಸಿದು ಕೈ ಹೊತ್ತು ಕುಂತಾಗ
ಬಂತು ದೀಪಾವಳಿ ಕತ್ತಲಲ್ಲಿರುವ
ನಮ್ಮ ಮನೆಗಳಿಗೆ ಕತ್ತಲೆಯಾಗಿಯೇ...........
ಏನು ಉಳಿದಿದೆ ಇಲ್ಲಿ !
ಬೆವರ ಬಸಿದು ಎಣ್ಣೆ ತಗೆಯಬೇಕು,
ಮಾಂಸ ಸಿಗಿದು ಹೂರಣ ತಿರುವಬೇಕು,
ಬದುಕಿನ ಬೆಂಕಿಯಿಂದ ತಣ್ಣಗಾದ
ಒಲೆ ಹೊತ್ತಿಸಬೇಕು.... ..........
ಬಾ....ದೀಪಾವಳೀ ನಿನಗೆ
ಕಣ್ಣೀರಿನ ಹಣತೆಗಳನ್ನಚ್ಚುತ್ತೇವೆ,
ಹಸಿ ನರಗಳ ತೋರಣ ಕಟ್ಟುತ್ತೇವೆ,
ಬಿಸಿ ರಕ್ತದ ರಂಗೋಲೆ ಬರೆಯುತ್ತೇವೆ,
ನಿಟ್ಟುಸಿರ ಕುದಿಯಲ್ಲಿ ಕಡುಬು ಕರಿದು,
ಎಡೆ ಮಾಡುತ್ತೇವೆ...............
ಬಾ ದೀಪಾವಳೀ ನಮ್ಮ ದಿವಾಳಿಯಾದ
ಮನೆಗಳಿಗೆ ಅತಿಥಿಯಂತೆ.

# ನಾಳೆ ಹೂವಾಗುವವರೇ

ನಾಳೆ ಹೂವಾಗುವ ಮೊಗ್ಗೆಗಳೇ
ಈ ವ್ಯವಸ್ಥೆಗೆ ಹೊಸ ಬಣ್ಣ ಕೊಡುವವರೇ
ಕೆಂಪಾಗಿ ಅರಳಿ !
ಹುಟ್ಟುವ ಹೊಸ ಹಗಲು ನಿಮ್ಮನ್ನು ಸ್ವಾಗತಿಸಲು ನಿಲ್ಲುತ್ತದೆ
ಆದರೆ..........

ರಕ್ತ ಹೀರುವ ನಾಲಿಗೆಗಳ
ಗಾಳಕ್ಕೆ ಸಿಕ್ಕಿ ಬೀಳದಿರಿ !
ನಿನ್ನೆ................ಮೊಗ್ಗೆಗಳು
ಅದೇ ಕತ್ತಲೆಯಲ್ಲೇ
ಕರಗಿ ಹೋದವು
ನಾರುತ್ತಿಲ್ಲವೇ ಹೆಣದ ವಾಸನೆ !
ಕಾಣುತ್ತಿಲ್ಲವೇ ಚೆಲ್ಲಿದ ರಕ್ತ !
ಗೋರಿಗಳಿಂದ ಸುರಿವ ಕಣ್ಣೀರು !
ನಿಮಗೂ ಹಸಿ ಹಸಿ ನೆನಪಿರಬಹುದು
ಆ ನೋವುಗಳ ಬದುಕು
ಈಗ ಅವೆಲ್ಲಾ ಇತಿಹಾಸದಲ್ಲಿ
ಮುಗಿದ ಅಧ್ಯಾಯಗಳು.
ಭ್ರಮೆಗಳ ಗಂಟನ್ನ ತಾತ–ಮುತ್ತಾತಗಳ
ಸಮಾಧಿಗೆ ನೇತು ಹಾಕಿ ಬನ್ನಿ
ಮತ್ತೆ ಅದೇ ಕತ್ತಲೆಯಲ್ಲಿ
ನೀವೂ ಕರಗಿ ಹೋಗದಂತೆ.
ಆಚೆ ನೋಡಿ............
ನೀಲಿ ದಿಗಂತದಲ್ಲಿ ತಿಳಿಗೆಂಪು ಬಣ್ಣ,
ಹೊಸ ಕಿರಣ
ನಿಮ್ಮ ಮೈಗಳು ವಿದ್ಯುತ್ ಸ್ಥಾವರಗಳಾಗಲಿ,
ಹಾಯುವ ಬೆಂಕಿ ಈ ಕಾಡು
ಮೃಗಗಳನ್ನ ಮಣ್ಣು ಮಾಡಲಿ
ಇನ್ನೆಂದೂ ಹುಟ್ಟದಂತೆ !

# ಅಂತರಾಳ

ಕಾರ್ಖಾನೆಯ ಕೂಗು ಕದ ಬಡಿದು
ಎಚ್ಚರಿಸುವಾಗ ಹೋರಾಟದ ಹಾಡುಗಳನ್ನ
ಗುನುಗುಟ್ಟುತ್ತಾ ಏಳುತ್ತೇವೆ
ಆಗ ನಸುಕಿನ ಸುಪ್ರಭಾತಗಳು
ನಮಗೆ ಕರ್ಕಶವಾಗುತ್ತವೆ
ಸೈಕಲ್ ಹತ್ತಿ ಬೀದಿ ಬಯಲುಗಳನ್ನ
ತುಂಬಿ ಹಕ್ಕಿನ ಬೆಲ್ ಬಾರಿಸುತ್ತಾ
ದುಡಿಯ ಹೊರಡುತ್ತೇವೆ.
ಬರುವಾಗ ನಿರಾಸೆಯ ಮುಖ ಹೊತ್ತು
ದಿನಗೂಲಿಯೊಂದಿಗೆ ಮತ್ತೆ ಅದೇ
ಬೆಲ್ ಬಾರಿಸುತ್ತಾ ಕತ್ತಲೆಯಲ್ಲಿ ಕರಗುತ್ತೇವೆ
ಕಪ್ಪು ನೋಟುಗಳ ಕಟ್ಟುಗಳನ್ನ ಇಡಲು
ಮಬ್ಬುಗತ್ತಲಿನಲ್ಲಿ ನೀವು ಜಾಗ
ಹುಡುಕುತ್ತಿರುವಾಗ
ಕಳೆದ ನಿನ್ನೆಯ,
ಬರುವ ನಾಳೆಯ ಬಗ್ಗೆ
ಮಾತಾಡಲು ಸಭೆ ಸೇರುತ್ತೇವೆ.
ವಸಂತ ಋತುವಿಗಾಗಿ
ಕಾಯುವ ಕೋಗಿಲೆಗಳಂತೆ
ನಮ್ಮ ದಿನಕ್ಕಾಗಿ,
ನಿಗದಿತ ಸಮಯಕ್ಕಾಗಿ
ನಾವು ಕಾಯುತ್ತಿರುತ್ತೇವೆ
ಕೊರೆಯುವ ಚಳಿಯಲ್ಲೂ
ಬೆವರುವ ನಾವು
ನಿಮ್ಮ ಸುತ್ತು ನಿಂತು
ನಾವೇ ಮಾಲೀಕರೆಂದು
ಆ ದಿನ ಕೂಗುತ್ತೇವೆ.

# ಬೀದಿಗಿಳಿದು ಬನ್ನೀ ಪುಟಾಣಿಗಳೇ

ಬೀದಿಗಿಳದು ಬನ್ನೀ... ........ಪುಟಾಣಿಗಳೇ
ಬೀದಿಗಿಳಿದು ಬನ್ನೀ............

ನಿಮ್ಮ ದಿನಾಚರಣೆ ಬಂದಿದೆ.

ಮುರುಕು ಜೋಪಡಿಗಳಿಂದ

ಹರಕು ಬಟ್ಟೆಗಳಲ್ಲಿ

ಖಾಲಿ ತಟ್ಟೆಗಳನ್ನ ಝುಣ ಝುಣ

ಬಾರಿಸುತ್ತಾ ಬೀದಿಗಿಳಿದು ಬನ್ನೀ............

ಹಸಿದು ಹೋಗಿದ್ದೀರಾ, ಭಿಕ್ಷೆ ಬೇಡುತ್ತಿದ್ದೀರಾ.
ಜೀತಕ್ಕಿದ್ದೀರಾ, ಬೂಟ್ ಪಾಲೀಷ್ ಮಾಡುತ್ತಿದ್ದೀರಾ,
ಹೊಟೆಲ್‌ಗಳಲ್ಲಿ ಕಪ್ಪು ತೊಳೆಯುತ್ತಿದ್ದೀರಾ,
ರಿಮ್ಯಾಂಡ್ ಹೋಂಗಳ ನರಕದಲ್ಲಿದ್ದೀರಾ,
ಬಾರ್‌ಗಳಲ್ಲಿ, ಕೆಂಪು ದೀಪಗಳಡಿಯಲ್ಲಿ
ಸಪ್ಲೈಯರ್ಸ್ ಆಗಿದ್ದೀರಾ............
ಎಲ್ಲಿದ್ದೀರಿ ಪುಟಾಣಿಗಳೇ ಬೀದಿಗಿಳಿದು ಬನ್ನೀ !

ತಿನ್ನಲು ಅನ್ನವಿಲ್ಲವೇ, ಕುಡಿಯಲು ಹಾಲಿಲ್ಲವೇ,
ತಲೆಗೆ ಎಣ್ಣೆ ಇಲ್ಲವೇ, ಬಿಸಿಲಲ್ಲಿ ಕಾಲು ಸುಡುತ್ತಿಲ್ಲವೇ,
ಶಾಲೆಯ ದಾರಿ ಗೊತ್ತಿಲ್ಲವೇ. ಓದಲು ಪುಸ್ತಕಗಳಿಲ್ಲವೇ.........
ಹೇಗಿದ್ದೀರಿ ಪುಟಾಣಿಗಳೇ ಬೀದಿಗಿಳಿದು ಬನ್ನೀ ;

ಸಮಾನತೆಯ ಕಣ್ಣಿಂದ ವಂಚಿತರಾದವರೇ,
ನಿರ್ಜೀವ ಕ್ಯಾಮರಾಗಳಿಗೆ ಚಿತ್ರವಾದವರೇ,
ಕಣ್ಣೀರಿನ ಹನಿಗಳಲ್ಲಿ ಕವನಗಳಾದವರೇ,
ಉಪಗ್ರಹ, ಬಾಂಬುಗಳಡಿ ಆಹುತಿಯಾದವರೇ,
ದೇಶ ಕಟ್ಟುವ ಸುಂದರ ಕನಸುಗಾರರೇ,
ಎಲ್ಲಿದ್ದೀರಿ ಸ್ವತಂತ್ರ ಭಾರತದ ಅನಾಥ ಪ್ರಭುಗಳೇ............
ಬೀದಿಗಿಳಿದು ಬನ್ನೀ
ನಿಮ್ಮ ದಿನಾಚರಣೆ ಬಂದಿದೆ
ಖಾಲಿ ತಟ್ಟೆಗಳನ್ನ ಝುಣ ಝುಣ ಬಾರಿಸುತ್ತಾ
ಬೀದಿಗಿಳಿದು ಬನ್ನೀ.

# ನಾ ಕಳೆದು ಹೋಗಿದ್ದೆ

ಬ್ಯಾಂಡಿನ ಬಡಿತ, ಗಗನ ಮುಟ್ಟಿದ
ಘೋಷಣೆಗಳು......... ನಸುಕಿನ
ನಿರಾಳ ಮೌನವನ್ನ ಸೀಳಿ ಹೇಳುತ್ತಿದ್ದವು
"ಇಂದು ಸ್ವತಂತ್ರ ದಿನಾಚರಣೆ"!
ಕೋಲಿನ ಮೇಲೆ ಜೋಲು ಬಿದ್ದ ರಾಷ್ಟ್ರ ಧ್ವಜ,
ಫುಟ್‌ಪಾತಿನ ಮೇಲೆ ಸಲಾಂ ಮಾಡಿ
ದೈನಾಸದಿಂದ ಕೈಚಾಚಿ ಬೇಡುವ
ನಿರಾಸೆಯ ಮುಖಗಳು...........
ಬೆವರು ರಕ್ತವನ್ನ ತುಳಿದು
ಹೋಗುತ್ತಿರುವ ರಾಜಕಾರಣಿಗಳ,
ಬಿಳಿ ಕಾಲರ್‌ಗಳ ಗರಿಗರಿ ಚಪ್ಪಲಿಗಳು.
ಸೋಗಿನ ಆಚರಣೆಗೆ ತಿಳಿ ಬೆಳಕಿನ
ಮುಂಜಾವು ಕರಾಳ ರಾತ್ರಿಯಂತಾಗಿತ್ತು.
ವೈಯಾರದ ಶೆಲೂಟುಗಳು,
ಹೂವ್ ಚಲ್ಲುವ ಹೆಲಿಕ್ಯಾಪ್ಟರುಗಳು,
ಸ್ನೋ, ಪೌಡರ್ ಮೆತ್ತಿದ ಮುಖಗಳು,
ಈ ಥಳುಕಿನಲ್ಲಿ ಬಣ್ಣ ಬಣ್ಣದ ಚಿತ್ರವಾಗುತ್ತವೆ.
ತ್ಯಾಗ ಬಲಿದಾನಗಳ ವೀರಗಲ್ಲುಗಳು,
ಕೊಳಕು ನೀರಿನ ಪ್ರತಿಬಿಂಬಗಳು,
ಎಣ್ಣೆಯಿಲ್ಲದ ಚಿಮಣೀ ದೀಪಗಳು,
ನಿಟ್ಟುಸಿರ ಬದುಕಿನ ಗುಡಿಸಲುಗಳು...........
ಅಜ್ಞಾತವಾಗಿ ಈ ಗೋಜಲಿನಲ್ಲಿ ಎಲ್ಲೋ
ಅಡಗಿ ಹೋಗಿದ್ದವು.
ಬಣ್ಣದ ಬೆಳಕಿನಡಿಯಲ್ಲಿ,
ಅಮಲಿನ ನೊರೆಯಲ್ಲಿ
ಕೇಕೆಗಳು, ಕುಣಿತಗಳು ಆಚರಣೆಯ
ಪರಮಾವಧಿ ಮುಟ್ಟಿದ್ದವು.
ಆದರೆ ಯಾರೂ ಹುಡುಕಲಾರದ ಕತ್ತಲೆಯಲ್ಲಿ
ನಾ ಎಲ್ಲೋ ಕಳೆದು ಹೋಗಿದ್ದೆ.

# ಯುದ್ಧಕ್ಕೆ ವಿದಾಯ ಹೇಳಿ

ಯುದ್ಧ ಪ್ರೇಮಿ ಬಂದೂಕು-ಬಾಂಬುಗಳೇ
ಶಾಂತಿ ವಿರೋಧಿ ಚಂಡಮಾರುತಗಳೇ
ಬೀದಿ ಬೀದಿಗಳಲ್ಲಿ ರಕ್ತ '
ಹೆಣಗಳು !
ಬೆನ್ನು ಬಾಗಿದ ತಂದೆ ತಾಯಿಗಳು,
ಬಸಿರಾದ ಹೆಂಡತಿಯರು,
ಮುಗ್ಧ ಕಂದಮ್ಮಗಳು.................
ಅನಾಥರಾಗಿದ್ದಾರೆ,
ಹಸಿವಿನ ಬೆಂಕಿಯಲ್ಲಿ ಬೇಯುತ್ತಿದ್ದಾರೆ.
ರಕ್ತದ ಅಭ್ಯಂಗ ಸ್ನಾನ ಮಾಡುವವರೆ........!
ಹಸಿದ ಮಾಂಸದ ಔತಣ ಕೂಟದ ಅತಿಥಿಗಳೆ........!
ಕಣ್ಣೀರಿನ ಧಾರೆಗೆ ನಿಮ್ಮ ಮನಗಳೆಲ್ಲಾ
ಉದ್ಯಾನವನಗಳಾಗಿವೆ.
ತಳಮಳಗೊಂಡ ಹೃದಯಗಳಲ್ಲಿ ನಿಮ್ಮ
ಬಂದೂಕಿನ ನಳಿಗೆಗಳು
ಬೆಣ್ಣೆ ಕಡೆಯುತ್ತಿವೆ.
ನಿಮ್ಮ ಹೆಸರುಗಳನ್ನ ಇತಿಹಾಸ
ಹೇಸಿಗಲ್ಲುಗಳಲ್ಲಿ ಕೆತ್ತುತ್ತದೆ.
ನಮ್ಮ ಶಾಂತಿಯಿಂದ ಬಂದೂಕುಗಳು
ತಣ್ಣಗಾಗುತ್ತವೆ.
ನಿಮ್ಮ ಬಾಂಬಿನಡಿ ನೀವೇ
ಆಹುತಿಯಾಗುವುದಕ್ಕೆ ಮುಂಚೆ
ಕಣ್ಣೊಳಗಿಟ್ಟುಕೊಂಡ ಕೆಂಡದ
ಚೂರಿಗಳನ್ನೆಸೆದು
ಮೃದು ಗುಲಾಬಿಗಳನ್ನ ತುಂಬಿಕೊಳ್ಳಿ,
ಸಾಗರಕ್ಕೆಸೆದು ನಿಮ್ಮ ಅಸ್ತ್ರಗಳನ್ನ !
ಹರಿದೆಸೆದು ನಿಮ್ಮ ಸಮ ವಸ್ತ್ರಗಳನ್ನ
ವಿಶ್ವ ಶಾಂತಿಗೆ ಬನ್ನಿ ಯುದ್ಧಕ್ಕೆ ವಿದಾಯ ಹೇಳಿ.

## ನಾ ಬರೆಯುತ್ತೇನೆ

ವರ್ಣದ ಪರ್ವತಗಳನ್ನೊಡೆದು,
ಧರ್ಮ ಜಾತಿಗಳ ಗೋಡೆಗಳನ್ನ ಮುರಿದು,
ಹಿಮಾಲಾಯದ ತುತ್ತ ತುದಿಯ ಮೇಲೆ
ನಿಂತು ರಕ್ತಾಕ್ಷರಗಳಲ್ಲಿ ಬರೆಯುತ್ತಿದ್ದೇನೆ............
ಬೆವರ ಹನಿಗಳ ನೀರುಂಡು ಬೆಳೆದ
ರಾಶಿ ರಾಶಿ ಧಾನ್ಯ ಹಸಿದ ಹೊಟ್ಟೆಗಳನ್ನ ತುಂಬಲಿಲ್ಲ
ಥಾನು ಥಾನು ಬಟ್ಟೆ ನಗ್ನ ಮೈಗಳ
ಮಾನ ಮುಚ್ಚಲಿಲ್ಲ.
ಮೈ ಮುರಿದು ದುಡಿದ ಮೈಗಳಿಗೆ
ಸ್ವರ್ಗೀಯ ಬಂಗಲೆಗಳು ಆಶ್ರಯ ನೀಡಲಿಲ್ಲ.
ಕಣ್ಣೀರು ಕುದ್ದು ಆವೆಯಾದರೂ
ಈ ಮಣ್ಣಿಗೆ ಕಣ್ಣು ಕಾಣಿಸಲಿಲ್ಲ,
ತಲ್ಲಣಿಸಿ ಕೊರಗುತ್ತಿದ್ದರೂ
ಈ ಚಂಡಮಾರುತಗಳಿಗೆ ದಯ ಬರಲಿಲ್ಲ
ಹಗಲು ರಾತ್ರಿಗಳೊಂದಿಗೆ ಸವೆದು
ಕ್ಷಯಕ್ಕೆ ತುತ್ತಾದವರನ್ನ
ಈ ವ್ಯವಸ್ಥೆ ಆರೈಕೆ ಮಾಡಲಿಲ್ಲ............
ಹಿಮದ ಚಳಿ ಕೊರೆದು ರಕ್ತ
ಹೆಪ್ಪಾದರೂ ಕಣ್ಣೀರಿನ
ಸಾಲುಗಳನ್ನು ಬರೆಯುತ್ತಲೇ ಇರುತ್ತೇನೆ
ಇಂದೋ............ ನಾಳೆಯೋ............ ನನ್ನ ಜನ
ಕಣ್ತೆರೆದು ಕೂಗಿದಾಗ
ಈ ನೆಲದ ಬಣ್ಣ ಬದಲಾಗಲೇ ಬೇಕು

# ಬಾ ಯುವ ಚೇತನಾ

ಸುಳಿಗೆ ಸಿಕ್ಕ ನೌಕೆಯೊಂದು
ಬೆದರಿ ಮುಳುಗಿ ತೇಲಿದಂತೆ
ಮೂಲೆಯಲ್ಲಿ ಏಕೆ ನಿಂತೆ,
ಮೂಕ ಪ್ರೇಕ್ಷಕನಾದೆ ಏಕೆ ?
ಮರೆತು ನಿನ್ನ ಸಿಂಹತೆ..............,
ನಂಜು ಮೊಳಕೆ ವೃಕ್ಷವಾಗಿ
ಬೇರು ಆಳ ಇಳಿಸಿದೆ
ವಿಷದ ಹಣ್ಣು ಬಿಟ್ಟಿವೆ,
ಬಕಗಳೆಲ್ಲ ಮೀನ ತಿಂದು
ಮೂಳೆ ರಾಸಿ ಎಸೆದಿವೆ,
ಚಿತ್ತಿ ಮಳೆಯ ನಾಯಿಗಳು
ಹೊಲಸು ವೀರ್ಯ ಚಲ್ಲಿವೆ,
ಉಪ್ಪರಿಗೆಯ ಮನೆಗಳೆಲ್ಲಾ
ಗುಡಿಸಲಿಗೆ ಬೆಂಕಿ ಹಚ್ಚಿ
ಚಳಿಯು ಕಾಸ ಹತ್ತಿವೆ..............

..............................................

ಕೈಯ ಕಟ್ಟಿ ಏಕೆ ಕುಂತೆ
ಮಣ್ಣಿನಲ್ಲಿ ಕೊಳೆತು ಹೋದ
ಹೆಣದಂತೆ :
ಗಬ್ಬು ನಾತ ಇದೆಯೆಂದು
ಮೂಗ ಗಟ್ಟಿ ಹಿಡಿದರೇ
ಉಸಿರುಗಟ್ಟಿ ನೀನೇ ಸಾಯ್ವೆ
ಬೀದಿಯಲ್ಲೇ ನಾಯಿಯಂತೆ...............

..............................................

ಉಕ್ಕಿ ಬರುವ ಚಿಲುಮೆಯಾಗು
ತುಕ್ಕು ಬಡಿವ ಕುಲುಮೆಯಾಗು
ಕ್ರಾಂತಿ ಬರೆವ ಕುಂಚವಾಗು............

..............................................

ಓ ಯುವಶಕ್ತಿ ಚೇತನಾ.

# ಜೀತಗಾರನ ಕನಸು

ಬಾನಂಗಳದ ಬಯಲಲ್ಲಿ
ಚಿಲಿಪಿಲಿಗಳ ಹಾರಾಟ
ರೆಕ್ಕೆಗಳಿಗೆ ಯಾವ ಬಂಧನವೂ ಇಲ್ಲ
ಎಣೆಯಿಲ್ಲದೇ ಹಾರಲು
ಕೊನೆಯೇ ಇಲ್ಲದ ಮೈದಾನ............
ಎಲ್ಲೆ ಇಲ್ಲದ ಸ್ವತಂತ್ರ............
ನನಗೂ ಹಾರಬೇಕೆನಿಸಿತು
ಆ ಕೆಂಪನೆಯ ದಿಗಂತದಲ್ಲಿ
ಆಸೆಗಳ ಉಬ್ಬರಕ್ಕೆ
ಬಿಗಿದ ಕಟ್ಟುಗಳು ತುಂಡಾಗಿ
ಹೊಸ ರೆಕ್ಕೆ ಮೂಡಿ
ಪಟಪಟನೇ ಬಡಿದು ಹಾರಿದೆ!
ದೂರಕ್ಕೆ ಹಾರಿದೆ............!
ಎಂದೂ ಕಾಣದ, ಅನುಭವಿಸದ
ಆನಂದ... ........!
ಮೈ–ಮನ ಪುಳಕಗೊಂಡು
"ಇನ್ನು ನಾ ಸ್ವತಂತ್ರ"
ಕೂಗಿದೆ............!
ಕೇಕೆ ಹಾಕಿದೆ............!
ದಿಕ್ಕುಗಳು ಅದುರುವಂತೆ,
ಗಗನ ಬೆದುರುವಂತೆ,
ಸಮುದ್ರ ಮೊರೆವಂತೆ.... .. ....
ಆವರಿಸಿದ್ದ ಮೌನ ಸೀಳಿ
ಇಬ್ಭಾಗವಾಯಿತು............
"ಏಕೆ ಮಗೂ ಚೀರಿದೆ......."?
ಅವ್ವ ಬಡಿದೆಬ್ಬಿಸಿದಳು
ಎಲ್ಲವೂ ಕನಸು............
ನಿರಾಸೆ............

ಜೀತದ ಸರಪಳಿಗಳು
ಬಿಗಿದೇ ಇದ್ದವು
ಬರೀ ಕನಸು...........
ಮನಸು ಕುಲುಮೆಯಲ್ಲಿ ಕೆಂಪಗೆ
ಕಾದ ಕಬ್ಬಿಣವಾಗಿತ್ತು
ಕಣ್ಣುಗಳಲ್ಲಿ ಜ್ವಾಲಾಮುಖಿ
ಸಿಡಿಯುತ್ತಿತ್ತು.

# ನಾನೇ ದೇವತೆ

ನಾನೊಂದು ಕಪ್ಪೆ,
ಆದರೆ .............
ನೀರಿನಿಂದ ಭೂಮಿಗೆ
ಭೂಮಿಯಿಂದ ನೀರಿಗೆ
ಕುಪ್ಪಳಿಸುವ ಕಪ್ಪೆಯಲ್ಲ.
ಬುದ್ಧಿ ಜೀವಿಗಳನ್ನ ತುಳಿದು,
ಹೊಗಳು ಭಟರನ್ನ
ಹೊತ್ತು ನಡೆಯುತ್ತೇನೆ
ಮಾತಿನ ಮೋಡಿಯಿಂದ
ಮರುಳು ಮಾಡುತ್ತೇನೆ
ಯೋಜನೆಗಳನ್ನ ನಾನೇ
ಬರೆಯುತ್ತೇನೆ,
ಪ್ರಗತಿಯ ಸುಳ್ಳು ಸಂಖ್ಯೆಗಳನ್ನ
ತೋರಿಸುತ್ತೇನೆ.
ನಾನು ಈ ನೆಲದ ನೋವುಗಳನ್ನ
ಅಳಿಯುವುದೇ ಇಲ್ಲ.
ಸಾವುಗಳನ್ನೆಂದೂ ಎಣಿಸುವುದಿಲ್ಲ.
ಈ ಸಿಂಹಾಸನ ನನ್ನದು !
ನಂತರ ನನ್ನ ಮರಿ ಕಪ್ಪೆಯದು.
ಈ ಸಾಮ್ರಾಜ್ಯಕ್ಕೆ ನಾನೇ ದೇವತೆ !
ಎಲ್ಲರೂ ನನ್ನ ಭಕ್ತರೇ............
ಅಲ್ಲದವರು ನನ್ನ ಯಜ್ಞಕ್ಕೆ ಬಲಿಗಳು
ಎಲ್ಲರೂ ಈ ಕಪ್ಪೆಗೆ ದಾಸರು.

# ಐಕ್ಯತೆ

ನಮ್ಮ ನಿಮ್ಮಯ ಹೆಸರು
ಬೇರಾದರೂ ಹೃದಯ ಒಂದೇ,
ರೂಪ-ಭಾಷೆಯ ಬೆಡಗು
ಬದಲಿದ್ದರೂ ರಕ್ತ ಒಂದೇ
ಸಮತಟ್ಟಾದ ನೆಲಕ್ಕೇಕೆ
ಗಡಿ-ದಡಗಳ ಗೆರೆಗಳು
ಜಿಡ್ಡು ಧರ್ಮದ
ಬುದ್ಧಿ ಭ್ರಮಣೆಯೇಕೆ ?
ಪ್ರೇಮ ಬದುಕಿನ ದಾರಿಗೆ
ಬೇಧ-ಭಾವಗಳು ಮುಳ್ಳಾಗಲೇಕೆ ?
ಒಂದೇ ಜಲ-ಗಾಳಿಕುಡಿವ ಜೀವಿಗಳಿಗೆ
ಜಾತಿ-ವರ್ಣಗಳು ನಿಟ್ಟುಸಿರಾಗಬೇಕೆ ?
ಭಾಷೆ-ದ್ವೇಷಗಳಿಂದ ನಾವೆಲ್ಲ
ತುಂಡುತುಂಡಾಗಬೇಕೇ ?
ನಾವಲ್ಲವೇ ಭಾರತೀಯರು
ಅಲ್ಲವೇ ವಿಶ್ವಮಾನವರು.

# ನೀ ಸ್ವತಂತ್ರವಾಗು

ಓ ಕೆಂಪು ರಕ್ತದ ಕಪ್ಪು ಜನರೇ,
ಬಂಟುಸ್ಥಾನದ ಕೊಳೆಗೇರಿಗಳಲ್ಲಿ
ರೋಬೆನ್ ದ್ವೀಪದ ಸೆರೆಮನೆಯ
ಹಿಂಸೆಗಳಲ್ಲಿ ನೋವ ನುಂಗುವವರೇ,
ಕಣ್ಣೀರು ಕುಡಿದು ಸಿಡಿಮದ್ದು
ಅರೆಯುತ್ತಿರುವವರೇ,
ವಜ್ರದಗಣಿಗಳಲ್ಲಿ ಕಲ್ಲಿದ್ದಲಾಗಿ
ಉರಿಯುತ್ತಿರುವವರೇ............
ಈ ಅನಾಥ ಸಾಲುಗಳು
ನಿಮಗಾಗಿ ಕಣ್ಣೀರು ಹಾಕುತ್ತಿವೆ
ಹರಿದು ಹೋದ ನಿಮ್ಮ ತಾಳ್ಮೆಯ
ಹೃದಯಗಳನ್ನ ಹೊಲಿಯಲು
ತೆಗೆದುಕೊಳ್ಳಿ ನನ್ನ ಕರುಣೆಯ
ಸೂಜಿದಾರ.
ನಿಮ್ಮ ದಿನಕ್ಕಾಗಿಯೇ ಕಾಯುತ್ತಿದ್ದೇನೆ
ಸ್ವತಂತ್ರ ಗರಿಗೆದರಿ ಹಾರಲಿ............!
ನಲ್ಸೇನ್ ಮಂಡೆಲಾ ಬದುಕಿಯೇ ಇದ್ದಾನೆ
ಕುದಿಯುವ ರಕ್ತದ ಕಣಕಣಗಳಲ್ಲಿ
ಬಿಗಿದ ಸರಪಳಿಗಳು ತುಂಡಾಗುತ್ತವೆ
ನಿಮ್ಮ ಬೆಂಕಿಯಲ್ಲಿ ಬಿಳಿಯರು
ಸುಟ್ಟು ಬೂದಿಯಾಗಲೇಬೇಕು!
ಬಂದೂಕುಗಳು ಪಾಠ ಕಲಿಯಲೇಬೇಕು!
ಹಿಟ್ಲರ್ ಇತಿಹಾಸದಲ್ಲಿ ಮಣ್ಣಾಗಲಿಲ್ಲವೇ............?
ಆ ದಿನಗಳು ಹತ್ತಿರವಾಗುತ್ತಿವೆ
ದಿಗಂತದಲ್ಲಿ ಹೊಸಸೂರ್ಯ ಮೂಡುತ್ತಾನೆ.
ಸ್ವತಂತ್ರವಾಗು ಓ............ದಕ್ಷಿಣ ಆಫ್ರಿಕಾ!

# ತೋಳಗಳೇ........ನಾಯಿಗಳೇ

ಬಿರ್ಲಾನ ಬೂಟುಗಳೇ
ಟಾಟಾನ ಕಾಲ್ಚೆಂಡುಗಳೇ
ದುಡಿವ ಜನರ ರಕ್ತ ಹೀರುವ
ತೋಳಗಳೇ, ಸಿಪಿ ನೈ ನೆಕ್ಕುವ ನಾಯಿಗಳೇ.... .....
ನಿಟ್ಟುಸಿರು ಬಿಡುತ್ತಿರುವ
ಈ ದಮನಿಗಳಲ್ಲಿ
ರಕ್ತ ಮಾತ್ರ ಹರಿಯುತ್ತಿಲ್ಲ,
ಸಿಡಿ ಮದ್ದಿನ ಸೆಲೆಯೂ ಅಡಗಿದೆ.
ವಿಸ್ಕಿಯ ಮತ್ತಿಗೆ
ಪಲ್ಲಂಗಗಳ ಮೇಲೆ ಕುಣಿವ
ನಗ್ನ ತೊಡೆಗಳ ಗತ್ತಿಗೆ
ಕಪ್ಪು ರಾತ್ರಿಯ ನಿಮ್ಮ
ಮೋಡಗಳು ಕಾಮದ-ಮಳೆ ಚಲ್ಲಿ
ಹೊಲಸು ಭ್ರೂಣಗಳನ್ನ ಹುಟ್ಟಿಸುತ್ತಿದ್ದರೆ........
ಎಚ್ಚೆತ್ತ ನನ್ನ ಜನಗಳ
ಒಂದೊಂದು ಎಲುಬುಗಳು
ಅಡಗಿರುವ ರಂಜಕದೊಂದಿಂಗೆ
ಘರ್ಷಣೆ ಹೊಂದಿ
ಬೆಚ್ಚುಗತ್ತಿಗಳನ್ನ ಹಡೆಯುತ್ತವೆ

## ಬರೀ ಸಾಂತ್ವಾನದಲ್ಲೇ

ಹೀಗೇ ಕಳೆದು ಹೋಗುತ್ತಿದೆ
ಇರುವ ಆಯುಸ್ಸು............
ಬೆಲ್ಚಿಯಲ್ಲಿ ಬೆಂದವರ
ನಾರಾಯಣಪುರದಲ್ಲಿ ಮಾನಭಂಗವಾದವರ
ಭಾಗಲ್ಪುರದಲ್ಲಿ ಕುರುಡರಾದವರ
ಮಾಯಾತ್ಯಾಗಿಯಂತೆ ನಗ್ನವಾಗುತ್ತಿರುವವರ........
ಬರೀ ಸಾಂತ್ವನದಲ್ಲೇ.
ಕೊಲೆ ಸುಲಿಗೆಗಳಿಂದ ಮಸಣ
ವಾಗುತ್ತಿರುವ ಬದುಕನ್ನ
ಬರಿಗಣ್ಣಿನಿಂದ ನೋಡುವಲ್ಲೇ............
ದೇಶಕಟ್ಟಿ ಸಿಂಹಾಸನ
ಬಿಟ್ಟು ಕೊಟ್ಟವರ ಜೊತೆ
ಬಂದೂಕಿನ ನಳಿಗೆಗೆ ಎದೆಗೊಟ್ಟು
ನಿಲ್ಲದಿದ್ದರೆ
ಈ ನೆಲ ತತ್ತರಿಸುತ್ತದೆ
ಮತ್ತೆ ಹುಟ್ಟುತ್ತದೆ ಬೆಂಕಿ
ಬೆಲ್ಚಿಗಳ ಬೂದಿಯ ಮೇಲೆ
ಹೊಲಸು ಭ್ರೂಣದಂತೆ.

# ಕೆಂಪುಕೊಡ

ಎದುರಲ್ಲೇ ಇದ್ದರೂ
ಗುರುತು ಹತ್ತುತ್ತಿಲ್ಲ
ಕಾರಣ ........
ದೀಪಗಳಲ್ಲಿದ್ದ ಎಣ್ಣೆಯಲ್ಲಾ
ಇಂಗಿ ಹೋಗಿದೆ
ಕತ್ತಲೆಯ ಆಳದಲ್ಲೋ,
ಮೂಲೆಯಲ್ಲೋ ಮುದುಡಿಕೊಂಡಿದೆ
ಯಾವುದೋ ತಳದಲ್ಲಿ ಸಿಕ್ಕಿಕೊಂಡಿದೆ
ಕಾಲ ಹತ್ತಿರವಾಗುತ್ತಿದ್ದರೂ,
ಗಡಿಯಾರ ಎಚ್ಚರಿಸುತ್ತಿದ್ದರೂ............
ಆರಿದ ದೀಪಗಳಿನ್ನು ಉರಿಯಬೇಕು !
ಕುರಿಗಳು ತೋಳಗಳಾಗಲೇ ಬೇಕು !
ಆಳಕ್ಕೆ ಇಳಿದು
ತಳ, ಮೂಲೆ ಶೋಧಿಸುತ್ತೇನೆ
ಪಾತಾಳ ಗರಡಿಯಂತೆ
ಮುಳುಗಿ ಹೋದ ಕೆಂಪುಕೊಡವನ್ನ
ಹೊತ್ತು ತರುತ್ತೇನೆ.
ಈ ನೆಲಕ್ಕೆ ಹೊಸ ಚಾಲನೆಕೊಟ್ಟು
ನನ್ನ ಮೊಳಕೆ ಮೊಗ್ಗೆಗಳಿಗೆಲ್ಲಾ
ಹೊಸ ಭರವಸೆ ಹೇಳುತ್ತೇನೆ.

# ಎದ್ದು ಬನ್ನೀ

ಬನ್ನೀ ಕವಿಗಳೇ
ಈ ನೆಲದ ಕಣ್ಣೀರ ಬರೆಯಲು,
ಪುಟಗಳಲ್ಲಿ ಕ್ರಾಂತಿ ತುಂಬಲು
ಬನ್ನೀ ಸಂವಿಧಾನ ತಜ್ಞರೇ
ಈ ದೇಶಕ್ಕೆ ಹೊಸ ಸಮಾನತೆ, ಭಾವೈಕ್ಯತೆ ಬರೆಯಲು
ಸಮಾಜವಾದಿಗಳೇ ಬನ್ನೀ
ಈ ವ್ಯವಸ್ಥೆಯ ಅಸಮಾನತೆ ನೀಗಿಸಲು,
ನ್ಯಾಯವಾದಿಗಳೇ ಬನ್ನೀ
ಈ ಸಮಾಜಕ್ಕೆ ಹೊಸ ನ್ಯಾಯದ ಪುಸ್ತಕ ಬರೆಯಲು,
ಬನ್ನೀ ವಿಚಾರವಾದಿಗಳೇ
ಈ ಅವೈಚಾರಿಕ ಅಸಂಗತಗಳನ್ನ ನಿರ್ಮೂಲನ ಮಾಡಲು,
ಬನ್ನೀ ವಿಜ್ಞಾನಿಗಳೇ
ಈ ಅವೈಜ್ಞಾನಿಕ ಬೇರುಗಳನ್ನ ಸುಟ್ಟು ಹಾಕಲು,
ಹೋರಾಟಗಾರರೇ ಬನ್ನೀ
ಕಳೆದು ಹೋದ ಸ್ವತಂತ್ರ ಸೂರ್ಯನನ್ನ ಹೊತ್ತುತರಲು
ಬೇಗ ಬನ್ನೀ............ದಿಗಂತದಲ್ಲಿ
ಬೆಳ್ಳಿ ಮೂಡುತ್ತಿದೆ.............ಎದ್ದು ಬನ್ನೀ !

# ಲಂಚೇಶ್ವರಾ

ಉಫೇ....ಉಫೇ ಲಂಚೇಶ್ವರಾ
ಉದ್ದಕು ನೀನೇ, ಅಗಲಕು ನೀನೇ,
ಎಲ್ಲಿಡೆ ನಿನ್ನ ವಿಸ್ತಾರ
ಬಿರುಸು ಬಂಡೆಯು ಸೀಳಿ
ಗರ್ಭದಾಳಕೆ ಇಳಿದು
ಕುದಿಯುವ ರಸದಲಿ ಅದ್ದಿದ ಬೇರು
ಗಗನದೆತ್ತರಕೆ ನಿಂತಿಹ ತೇರು
ಉಫೇ....ಉಫೇ ಲಂಚೇಶ್ವರಾ.

ಶಹಬ್ಬಾಸ್ ದೊರೆಯೇ, ನಿನಗಾರು ಸರಿಯೇ
ಸರಿ ಎಂದವರ ಹಲ್ ಮುರಿಯೇ
ಎಲ್ಲರೂ ನಿನ್ನ ಗುಲಾಮರೆ ಸರಿಯೇ
ಕಚೇರಿಯಲ್ಲಿ ಪಾರ್ಥೇನಿಯಂ ಕರಿಕೆಯ ಹಾಸಿಗೆ
ನೀ ಜಾರಿದರೊಮ್ಮೆ ಕಲ್ಲಿನ ಮನವದು ಮೃದು ಮಲ್ಲಿಗೆ
ಈ ಕುರುಡು ದಿಬ್ಬಣ ಹೊರಟಿದೆ ಈಗ ಎಲ್ಲಿಗೆ ?
ಉಫೇ .......ಉಫೇ ಲಂಚೇಶ್ವರಾ.

ಹೆಣ್ಗಳ ಒಡೆಯರು, ಬಾಟಲಿ ಭೂಪರು
ಕಾರಕೂನ್, ಅಧಿಕಾರಿ, ಶಾಸಕ, ಮಂತ್ರಿ ನಿನಗೇ
ಡೊಗ್ಗಿ ಸಲಾಮ್, ಏನಿದು ನಿನ್ನಯ ಮೋಡಿ !
ತೇನವಿನಾ ಕಡತವು ನಃಚಲತೇ.... ...!
ಕುಣಿಯುವ ಕಾಲಿಗೆ ನೂಪುರ ಗೆಜ್ಜೆ
ತಾಳವ ತಪ್ಪಿ ಹಾಕುವ ಹೆಜ್ಜೆಗೆ ಎಲ್ಲಿದೆ ಲಜ್ಜೆ,
ಉಫೇ . ಉಫೇ ಲಂಚೇಶ್ವರಾ.

ತಾಂತ್ರಿಕ ನೀನೋ, ಮಾಂತ್ರಿಕ ನೀನೋ
ರಾಕ್ಷಸ ಕಾಯದ ಜೀವವು ಏನೋ
ಪಾತಾಳ ಭೈರವಿ ನೀನೋ ಏನೋ
ಸಪ್ತ ಸಾಗರದಾಚೆಯೋ......ಪಂಜರದಲ್ಲಿಯ ಗಿಣಿಯಲ್ಲೋ....
ಎಲ್ಲಿದೆ ಹೇಳು ಮಗನೇ, ಗೋಣ ಮುರಿಯಲು
ಹೊರಟಲ್ಲೇ ಚೆಲ್ಲಿದ ರಕ್ತದ ಬಿಂದುಗಳಲ್ಲಿ
ಸಾವಿರ........ಸಾವಿರ ... ರಕ್ತ ಬೀಜರು
ಉಫೇ........ಉಫೇ ಲಂಚೇಶ್ವರಾ.

# ಮಾಜೀ ಪ್ರೇಮಿ



ಓ———ಪ್ರಿಯತಮೇ
ನನಗೂ ನೆನಪಿಲ್ಲವೆಂದು ತಿಳಿದೆಯಾ
ಹುಲ್ಲು ಹಾಸಿಗೆಯ ಮೇಲೆ
ಕಲ್ಲು ಬೆಂಚಿನ ಮೇಲೆ
ಹೊಂಗೆಯ ಮರದಡಿ
ನಿನ್ನೊಂದಿಗೆ ಮಾತನಾಡಿ
ಹಾಡಿ ಕುಣಿದ ಆದಿನಗಳು
ಕೈ ಹಿಡಿಯುವ ಕಾತುರತೆಯಲ್ಲೇ
ಪದವಿಗಳು ಮುಗಿದುಹೋದುವಲ್ಲವೇ——?
ಕನಸು ಕಂಡ ಭರವಸೆಗಳೆಲ್ಲಾ
ನುಚ್ಚು ನೂರು.
ಊರೂರು ತಿರುಗಿ, ನೌಕರಿಗೆ ಹಲುಬಿ
ಕಂಡದ್ದು ನಿರಾಸೆ———
ಹೇಳಲು ನಾಚಿಕೆಯೇನಿಲ್ಲ
"ಈಗ ಹೋಟಲಲ್ಲಿ ಸಪ್ಲೈಯರ್"
ಬೆಲೆಗಳು ಏರಿದಂತೆ
ನಾ ಇಂಚು ಇಂಚು ಇಳಿಯುತ್ತಿದ್ದೇನೆ
ಬರೀ———ಯಾತನೆಯ ರಾತ್ರಿಗಳು
ಬಯಕೆಗಳು ಮೊಟ್ಟೆಯಿಟ್ಟು———ಮರಿಮಾಡಿ——
ನನಗೂ ಆಸೆ ಇದೆ.
ಆದರೇನು ಗೆಳತೀ ಎಲ್ಲೂ ಉತ್ತರಸಿಗದ
ಪ್ರಶ್ನೆಗಳು,
ಹಳೆಯ ವಿರಹರಾಗಕ್ಕೆ ನಾಂದಿ ಹಾಡು
ನಿನಗಾದರೂ ಸಿಗಲಿ ಹೊಸ ವೃಕ್ಷ
ಸುತ್ತಿ ಬಳಸುವ ಸುಖ
ಖಂಡಿತಾ ಲಗ್ನ ಪತ್ರಿಕೆ ಕಳಿಸು
ಮರೆಯಬೇಡ

ಇಂತಿ ನಿನ್ನ————
ಮಾಜೀ ಪ್ರೇಮಿ.

# ಚುನಾವಣೆ ಬಂತ್ರಣ್ಣ (ಲಾವಣಿ)

ಚುನಾವಣೆ ಬಂತ್ರಣ್ಣ ಚುನಾವಣೆ
ಹುಳಿ ಹೆಂಡ ಬಿಸಿಹಣ ಚಲಾವಣೆ
ಊರು ಕೇರಿ ಜನ್ರ ಗುಂಪು ಜಮಾವಣೆ
ಐದು ವರ್ಷಕ್ಕೊಮ್ಮೆ ಬಲುರುಚಿ ಈ ಒಗ್ಗರಣೆ ॥ಚು॥

ಗುಡಿಸಲ ಬಾಗಿಲ್ಗೆ ಬರ್‍ತಾರಣ್ಣಾ
ಎಲ್ಲಾರ್ಗೂ ಕೈ ಕೈ ಮುಗಿತಾರಣ್ಣಾ
ಮುಗುಲ್ಮುಟ ಆಶ್ವಾಸನೆ ಕೊಡ್ತಾರಣ್ಣಾ
ತಂಜಾವರಿ ಪಕ್ಷಾಂತರಿ ಇವ್ರೇ ಅಣ್ಣಾ ॥ಚು॥

ಇವ್ರ ಮಾತೆಲ್ಲಾ ಮಸಾಲಿ ದೋಸೆಗಳು
ಮನಸೆಲ್ಲಾ ಚೋಳೀನಾ ಕೊಂಡೆಗಳು
ಗೆಲ್ಲೊತನಕಾ ಬಾಲ ಮುದ್ರಿ
ಗೆದ್ದಮ್ಯಾಲೆ ನೋಡ್ರಿ ಬಿಳಿ ಕುದ್ರಿ, ಕುರಿಗಳ ತಿನ್ನೋ
ತೋಳಗಳಂತೆ ॥ಚು॥

ಓಟಾಕಿದ ಜನ್ರನ್ನಿವ್ರು ಮರ್ತೇಹೋದ್ರು
ಗುದ್ಲಿಪೂಜೆ ರಿಬ್ಬನ್ ಕಟ್ ಎತ್ಲಾಗೋದ್ರು
ಹಗಲು ರಾತ್ರಿ ಕಂಠಾಪೂರ್ತಿ, ಚಿತ್ತಿಮಳೆ
ನಾಯಿಗಳಂತೆ ಹುಡಿಗ್ಯಾರ್ ಜೊತೆ ಕತ್ಲರಾತ್ರಿ ॥ಚು॥

ಹಣಕ್ಕಾಗಿ ನೀತೀನಾ ಮಾರ್‍ತಾರಿವ್ರು
ದಿನಕ್ಕೊಂದು ಪಕ್ಷ ಬದ್ಲಿ ಮಾಡೋ ವೀರ್‍ರು
ಪ್ರಜಾರಾಜ್ಯ ಎಲ್ಲಿಗೆ ಬಂತು, ತೆರಿಗೆ ಭಾರ,
ಹಣದುಬ್ರ ಮೈಮ್ಯಾಲೆ ಕುಂತು ॥ಚು॥

ಅದೇ ಗುಡಿಸ್ಲು, ಕೊಳಚೆ ನೀರು
ಹರುಕು ಬಟ್ಟೆ, ಮುರುಕು ರೊಟ್ಟೆ
ಮಾಯದ ಗಾಯ್ಕೆ, ನೊಣಾ ಮುತ್ತಿ, ಸಾಲದ ಭಾರಕೆ
ಬೆನ್ನುಬಾಗಿ, ಹಿಂಗಾಕಳ್ದು ಹೋಗೇಬಿಟ್ವು
ದಿವ್ಸಗಳೆಲ್ಲಾ ॥ಚು॥

ಎಲ್ಲಿ ತನಕಾ ನೋಡ್ತೀರಿಪ್ರ ಖರಾಮತ್ತು
ಆಗಿಲ್ಲೇನೋ ಎಚ್ಚರದೊತ್ತು, ಬಾನಾಗಕಾಣೋ
ಕೆಂಪ್ರ ಹೊತ್ತು, ಸೊಕ್ಕುಮುರ್ದು, ನಡುಕಹುಟ್ಸಿ,
ಬಿಡ್ತೀನಕ್ಕಳ್ನಾ ಹಿಡಿದು ನಿಲ್ಸಿ ದಾರೇಗನಿಂತು ||ಚು||

## ಪಾತರದ ಚಂದ್ರವ್ವಾ ಅಂತ ಇದ್ಲು

ಹಿಂಗೊಂದೂರಾಗೇ ಪಾತರದ
ಚಂದ್ರವ್ವಾ ಅಂತಾ ಇದ್ಲು
ಆ ಮುದಿ ವಯಸ್ನಾಗೆ ಆಷ್ಟು
ಚಂದಾಗಿ ಕಾಣುತ್ತಿದ್ದವಳು
ಇನ್ನು ಹಂಗಾವ್‌ದಾಗೆ
ಆ ಸಂಗ್ಯಾನ ಗಂಗಿಯಂತೋ
ಬೇಲೂರ್ ಗೊಂಬೆಯಂತೋ........
...............ಇದ್ದಿರಬೇಕು !
ಬರೀ ಮೈ ಮಾರ್‍ಕೊಂಡೇ ಬದುಕ್ಲಿಲ್ಲಾ
ಅವ್ವ ಅಜ್ಜಿ ಉಳಿಸ್ಕೊಂಡು ಬಂದ
ಗಾನ, ನರ್ತನಾಭಿನಯಗಳ್ನ
ಬೆಳಿಸ್ಕೊಂಡೂ ಬಂದ್ಲು
"ನಾಟ್ಯರಾಣಿ"............"ರಂಗನಾಯಕಿ"..........
ಏನೆಲ್ಲಾ ಹೆಸರುಗಳಿಸಿದ್ಲು
ಅವ್ಳು ಹಾಡ್ತಿದ್ದ ಸಾಲುಗಳ್ನ
ಬರ್‍ಕೊಂಡವರು ಕವಿಗಳಾದ್ರು
ಕೂಟಗಳಲ್ಲಿ ರಸಿಕಳಾಗಿ ಎಲ್ಲರ
ಮೈ-ಮನ ತಣ್ಸಿ ಸುಖಾ ಉಣ್ಸಿದ್ಲು
ನಿಯತ್ನಾಗೇ................
ಆದ್ರೆ ಯಾಕೋ ಮಕ್ಳಾಗ್ಲಿಲ್ಲ !
ಎಲ್ಲಾ ತೀರಿಸ್ಕೊಂಡವರು
ಸೂಳೆ................ಅಂದ್ರು
ಚುಡಾಯ್ಸಿದ್ರು, ಸತಾಯ್ಸಿದ್ರು,
ಅವ್ಳ ಪ್ರತಿಭೆನಾ ಗುರ್ತಿಸ್ಲಿಲ್ಲಾ
ಗೌರವಿಸ್ಲಿ ಮಾತ್ರ...........
ಚಿಂತಿ ಕೊರ್‍ಯಾಕತ್ತಿ
ಬೇಗ್ ಬೇಗ ಮುದುಕಿ ಆದ್ಲು,
ಬೆನ್ನು ಬಾಗಿ ಹಲ್ಲೂ ಬಿದ್ವು

ಕೈಗೆ ಕೋಲೂ ಬಂತು
ಕೇಲ್ ಮುರ್ದು ಕುಂಟೇನೂ ಆದ್ಲು
ಆಮ್ಯಾಲೆ ಹಾದೀಪಾಲು, ಬೀದೀಪಾಲು
ಅವಳ ಮಾನ............
ಅಲ್ಲ........ಈ ದೇಶದ ಮಾನ
ನಡು ಬೀದ್ಯಾಗ ಹೋಗ್ತಾಯಿತ್ತು
ಉಡಾಳ್ರು ಕಲ್ ತೂರಿ
ಹುಚ್ಚೀ...........ಅಂದ್ರು
ಕಣ್ಣಿಂದ ಬಿದ್ದ ಒಂದೊಂದನಿ
ಈ ನೆಲಾನೇ ಸುಟ್ವು
ಒಂದಿನ ಬಸ್‌ಸ್ಟ್ಯಾಂಡ್ನಾಗೇ
ಸುಡೋ ಬಿಸಿಲ್ನಾಗೇ
ಈ ಜೀವ ತಣ್ಣಗಾಗೋತು
ಅವಳಿಗಾಗಿ ಯಾರೂ ಅಳ್ಲಿಲ್ಲ
ಆದ್ರೆ ಅವ್ಳು ಸತ್ತಜ್ಯಾಗ
ಇವತ್ತಿಗೂ ಅಳ್ತಾನೇ ಐತಿ

# ಸ್ಥಿರ ಚಿತ್ರ

ಮುಖವೆಲ್ಲಾ ಸುಕ್ಕು ಸುಕ್ಕು
ಊರುಗೋಲೂ ಹಿಡಿಯಲಾರ
ತೆವಳುತ್ತಾನೆ
ಭಿಕ್ಷೆಯಲ್ಲೇ ಬೆನ್ನು ಬಾಗಿಹೋಯಿತು,
ಐದು ವರ್ಷಕ್ಕೊಮ್ಮೆ ಕಾರು ಹತ್ತುತ್ತಾನೆ
ಮತ ಚಲಾಯಿಸಲು ಈ ಪ್ರಜಾರಾಜ್ಯದಲ್ಲಿ,
ರಸ್ತೆಯಲ್ಲಿ ಕೈಚಾಚಿ ಬೇಡುತ್ತಾನೆ
ಈ ಗರೀಭೀ ಹಠಾವ್ರೋ ದೇಶದಲ್ಲಿ
ಅಕಸ್ಮಾತ್ ಕ್ಯಾಮರಾದ ಕಣ್ಣಿಗೆ ಸಿಕ್ಕ!
ಆ ಛಾಯಾಗ್ರಾಹಕನಿಗೆ ಪ್ರಶಸ್ತಿಗಳ ರಾಸಿ ರಾಸಿ!

.................................... ....

ಆದರೇ ಈ ಅನಾಥಪ್ರಭು ಪತ್ರಿಕೆಗಳ
ಪುಟಗಳಲ್ಲಿ ಅನಾಮಧೇಯ
ದಿನವೂ ಕೊಳಕು ನೀರಿನಲ್ಲಿ ಇಣಿಕಿ
ಮೈ ಸುಕ್ಕುಗಳನ್ನ ಎಣಿಸಿಕೊಳ್ಳುತ್ತಿದ್ದಾನೆ,
ಹುಣ್ಣುಗಳಾದ ನಾಯಿಯಂತೆ ಮೈ ಪರಚಿಕೊಳ್ಳುತ್ತಿದ್ದಾನೆ
ಇಂಗಿದ ಕಣ್ಣುಗಳು ಆಕಾಶ ನೋಡುತ್ತಿವೆ
ಸಾವಿನ ದಿನಕ್ಕಾಗಿ,
ಒಂದು ದಿನ ಶ್ವಾಸನಿಂತು
ತ್ರಿವರ್ಣ ಧ್ವಜದ ಹೊದಿಕೆಯಲ್ಲಿ
ಚಿರ ನಿದ್ರೆ ಹೋದರೆ
ಈ ಮುದುಕ ಮತ್ತೊಂದು ಸ್ಥಿರಚಿತ್ರವಾಗುತ್ತಾನೆ.

# ಶೋಕ ಗೀತೆ

ದಮನಕ್ಕೆ ದನಿ ಎತ್ತದೇ
ಮೌನಗಳಲ್ಲಿಯೇ ಕಣ್ಣೀರು ಹಾಕುತ್ತಾ
ನೋವಿನ ಹಾಡುಗಳನ್ನ ಹಾಡುತ್ತಲೇ............
ಗಣಿಬಗೆದು ಚಿನ್ನ ತೆಗೆಯುತ್ತಿರುವವರೇ
ಗಾಣ ತಿರುವಿ ಎಣ್ಣೆ ಶೋಸುತ್ತಿರುವವರೇ
ಕೊಳಕು ಬಟ್ಟೆಗಳನ್ನ ಮೈಗೆ ಸುತ್ತಿಕೊಂಡು
ಎಳೆಎಳೆಗಳಿಂದ ಹೊಸ ಬಟ್ಟೆ
ನೇಯುತ್ತಿರುವವರೇ
ಬೀಸಿ ಕುಟ್ಟುವವರೇ
ಬಿತ್ತಿ ಬೆಳೆಯುತ್ತಿರುವವರೇ
ರೊಟ್ಟಿಗಾಗಿಯೇ ನೀವು ರಾತ್ರಿಗಳನ್ನ
ನಿದ್ದೆಗೆಟ್ಟು ಕಳೆದರೂ
ಈ ಬೆವರುಗಳ್ಳರು ನಿಮಗಾಗಿ
ಎಂದೂ ಕನಿಕರ ಪಡುವುದಿಲ್ಲ.
ಇವರೇ ಆಸೆಬುರುಕ ಬೂರ್ಜ್ವಾಗಳು
ಭೂಮಾಲೀಕರು, ನೀತಿಗೆಟ್ಟ ರಾಜಕಾರಣಿಗಳು.. ........
..........ರಕ್ತ ಕುಡಿದು ಎಲುಬುಗಳನ್ನ
ಪುಡಿ ಪುಡಿ ಮಾಡುವ ಆಕ್ಟೋಪಸ್‌ಗಳು
ತಮ್ಮ ಸುತ್ತಲೂ ಭದ್ರಕೋಟೆ ಕಟ್ಟಿಕೊಂಡು
ಹಾದಿಯ ಮೇಲೆ, ಮಲಗುವ
ಮಂಚದ ಮೇಲೆ ಹೂಚಲ್ಲಿಕೊಂಡಿದ್ದಾರೆ,
ಅಶೋಕವನವನ್ನ ನಿರ್ಮಿಸಿಕೊಂಡಿದ್ದಾರೆ... ... ....
ಆದರೇ ನೀವು ಕೈಯತ್ತಿ ಬರುವ
ಹಾದಿಯಲ್ಲಿ ಜಾಲಿಯಮುಳ್ಳು
ಚಲ್ಲಿದ್ದಾರೆ
ತುಳಿದು ನೋವಾಗಿ
ನೆತ್ತರು ಹರಿದು............

ಕೂಗಲೆತ್ತಿದ ನಿಮ್ಮ ಕೊರಳುಗಳು
ನೋವಿನಿಂದ ರೋಧಿಸಲೆಂದು
ಆದರೇ............
ಚುಚ್ಚಿ ಸಿಡಿದ ಆ ಬಿಂದುಗಳು
ಈ ಭೂಮಿಯ ಮೇಲೆ ಕೆಂಪು
ತಾರೆಗಳ ಹೊಸ ಲೋಕವನ್ನ ಸೃಷ್ಟಿಸುತ್ತವೆ
ಗಾಯದ ಕಲೆಗಳು ಗಗನದಲ್ಲಿ ದೀಪಹಚ್ಚಿ
ಹೊಸ ಸಾಲುಗಳಿಂದ ಚರಿತ್ರೆ ಬರೆಯುತ್ತವೆ
ಸಮುದ್ರಗಳು ಸುಡುವ ಸೂರ್ಯನೊಂದಿಗೆ
ಬೆರೆತು ಹೊಸಮಳೆ ತರುತ್ತವೆ.
ಹುಸಿ ದಿನಗಳೆಲ್ಲಾ ಕೊಚ್ಚಿಹೋಗಿ
ಕಾದ ನೆಲ ತಂಪಾಗುತ್ತದೆ.
ನೋಡೀ............
ನಿಮ್ಮ ಆಗಮನಕ್ಕಾಗಿ
ನಾನು ಕಾದು ಕುಂತಿದ್ದೇನೆ
ಕೂಗಿದಾಗ, ಎಚ್ಚರಿಸಿದಾಗ
ನೀವು ವಿಜಯದ ಹಾಡು ಹೇಳುತ್ತಾ
ಸಾಗರದಂತೆ ಸೈನ್ಯವಾಗಿ ಬರುವಿರೆಂದು ನಂಬಿದ್ದೆನೆ.
ಹಳೆಯ ದಿನಗಳಿಗೆ,
ಮೌನಗಳಿಗೆ ನಾಂದಿಹಾಡಿ
ಈ ವ್ಯವಸ್ಥೆಗೆ ವಾರಸುದಾರರಾಗಲು.
ಅಜ್ಞಾನದ ಬೆಲ್ಲಕ್ಕೆ
ಹೇಸಿಗೆಯ ದುರ್ನಾತಕ್ಕೆ
ನೊಣ–ಸೊಳ್ಳೆಗಳಂತೆ
ಕುಂತಲ್ಲೇ ಅಂಟಿಕೊಂಡರೆ,
ಕಾಯದೇ ಕುದಿಯದೇ,
ತಣ್ಣಗಾಗಿ ಹೋದರೇ............
ಆ ಉಕ್ಕಿನ ಕೈಗಳು ನಿಮ್ಮ ಗೋಣುಗಳನ್ನ
ಮೆತ್ತಗೇ ಹಿಚುಕುತ್ತವೆ.

ಈ ನೆಲದ ನೋವಿಗಾಗಿ
ಅವರೆಂದೂ ಅಳುವುದಿಲ್ಲ
ಒಂದಿಷ್ಟು ಹಿಂದಿನ ಪುಟಗಳನ್ನ
ತಿರುವಿ ನೋಡಿ !
ಕೂಲಿಗಾಗಿ ಹೋರಾಟ ಮಾಡಿದವರು
ನ್ಯಾಯಕ್ಕಾಗಿ ರಕ್ತ ಹರಿಸಿದವರು..........
ಸಾಲುಸಾಲುಗಳಲ್ಲಿ, ಪದಪದಗಳಲ್ಲಿ,
ಹಸಿ ಹಾಳೆಗಳಲ್ಲಿ ತುಂಬಿಕೊಂಡಿದ್ದಾರೆ.
ನಿಮ್ಮ ಸಾವುಗಳ ಮೇಲೆ
ಗುಲ್‌ಮೊಹರ್‌ಗಳನ್ನ ನೆಟ್ಟಿದ್ದಾರೆ
ನಾನಾಗಲೆ ನಿಮಗೆ ಹೇಳಿದ್ದೇನೆ
ಅವರ ಮನ ನಿಮಗಾಗಿ ಎಂದೂ...........
...... ಎಂದೆಂದೂ ಕರಗುವುದಿಲ್ಲ
ಕಾರಣ ಅವರದು ಕ್ರೂರ ರಕ್ತ !
ಕೂಗಿದಾಗ ನೀವು ಎಚ್ಚರಗೊಂಡು
ಮೂಲೆಮೂಲೆಗಳಿಂದ ಕೈಯೆತ್ತಿ
ತುಂಬಿ ಹರಿವ ನದಿಗಳಂತೆ
ಹಾದಿಗಳಲ್ಲಿ, ಬೀದಿಗಳಲ್ಲಿ,
ಬಯಲುಗಳಲ್ಲಿ ಒಂದುಗೂಡಬೇಕು
ನಿಮ್ಮ ಕಾದ ಕೈಗಳು ತುಕ್ಕು
ಹಿಡಿಯದಿದ್ದರೆ ಈ ಕಾವ್ಯ
ಖಡ್ಗವಾದಂತೆಯೇ........... !
ನರಸತ್ತು ಎತ್ತಲಾರದೇ ಹೋದರೇ
ಇದು ಬರೀ ಶೋಕ ಗೀತೆಯಾಗಿ ಉಳಿಯುತ್ತದೆ.

# ಹನಿಗವನಗಳು

## ಕವಿ

ಸೌಂದರ್ಯೋಪಾಸನೆಯು
ಆತ್ಮರತಿಯನ್ನ ಮರೆತು
ನೋವ ನುಂಗುವವರ
ಹೃದಯಗಳಲ್ಲಿ ಕುಳಿತು
ಕಣ್ಣೀರ ಒರೆಸಿ
ಹರಿಯದ ಹಾಳೆಗಳಮೇಲೆ
ಅಳಿಸದ ಸಾಲುಗಳನ್ನ
ಬರೆಯುತ್ತಾನೆ.

## ಪೆನ್

ಮೈಯಾಗ ಹನಿ ಕೆಂಪು
ರಕ್ತಾನೇ ಇಲ್ಲೇ
ಹಾಳಿ ಮ್ಯಾಲೆ ನನ್ನಿಂದ
ರೇಪ್ ಮಾಡ್ಸಿ
ಸುಳ್ಳು ಬರ್ಡಾಯ
ಬರೆಯೋರ್‍ನಾ ಪಿನ್
ಮಾಡೋ ಆರ್ಫನ್.

## ಬೆವರು

ದುಡಿವವರ ಮೈಯಲ್ಲಿ
ಸೆಲೆಯಾಗಿ ಹುಟ್ಟಿ
ವಿಲಾಸದ ಈಜುಗೊಳಗಳಿಗೆ
ಸುರಿದು, ಬಂಡವಾಳ
ಭೂಮಿಗೆ ನದಿಗಳಾಗಿ ಹರಿದು
ಸದ್ದಿಲ್ಲದೇ ಶೋಷಣೆಯ
ಸಾಗರಕ್ಕೆ ಧುಮುಕಿ
ಸಾಯುತ್ತದೆ.

## ನಮ್ಮೂರ ರಾಜಕಾರಣಿ

ಶಿಲ್ಕಿನ ಜುಬ್ಬಾ ತೊಟ್ಟು
ಕೂಲಿಂಗ್ ಗ್ಲಾಸ್ ಇಟ್ಟು
ಮ್ಯಾಲೀಸ್ ಮಾಡುವ
ಚೇಲಾಗಳೊಂದಿಗೆ
ದೊಣ್ಣೆ ಹಿಡಿದ
ಹಿಂಬಾಲಕರೊಂದಿಗೆ
ಹಿಡಿದೇನ್, ಬಡಿದೇನ್,
ರಕ್ತ ಕುಡಿದೇನ್
ಎಂದು ಕಿರುಚುವ
ಡಾಲ್ಡಾ ವೀರ

## ಶ್ರೀಮಂತ ನಾಯಿಗಳು

ಖಾಲೀ ಹೊಟ್ಟೆಗಳಲ್ಲಿ
ಚಿಂದಿ ಬಟ್ಟೆಗಳಲ್ಲಿ
ಅನ್ನಕ್ಕಾಗಿ ಬಸವಳಿದು
ತಿರುಗುವ ಅನಾಥ
ಜೀವಗಳನ್ನ ಕಂಡಕಂಡಲ್ಲೇ
ಹಲ್ಲು ಮಸೆದು ಕಡಿಯುತ್ತವೆ

## ಧರ್ಮ

ಕಾಣದ್ದನ್ನ ದೇವರೆಂದು ನಂಬಿಸಿ
ತಿಳಿಯದ್ದನ್ನ ಶಾಸ್ತ್ರವೆಂದು ತೂರಿಸಿ
ಜಾತಿ–ವರ್ಣಗಳ ಗೋಡೆ ನಿರ್ಮಿಸಿ
ಒಣ ಆದರ್ಶಗಳ ಬಿಸಿಲ್ಗುದುರೆ ಹತ್ತಿಸಿ
ಯಜ್ಞಕುಂಡಕ್ಕೆ ಮುಗ್ಧರನ್ನ
ಬಲಿ ತೆಗೆದುಕೊಳ್ಳುವುದು

## ಬೆಂಕಿ

ಮನಸಿನೊಳಗೆ ಹುಟ್ಟಿ
ದೇಹಗಳಿಗೆ ಹಚ್ಚಿ
ಬಾನೆತ್ತರಕ್ಕೇರಿ
ತಾ ಸುಟ್ಟುಕೊಳ್ಳದೇ
ಬೇಯುವುದ ಕಂಡು
ಗಹಗಹಿಸಿ ನಗುವುದು.

## ಸ್ವಾತಂತ್ರ್ಯ

ದಶದಶಕಗಳಿಂದಲೂ
ಕತ್ತಲೆಯ ಕೊರಕು ದಾರಿಗಳಲ್ಲಿ
ಕಲ್ಲು ಮುಳ್ಳು ತುಳಿದು
ಹಸಿದ ಹೊಟ್ಟೆಯಲ್ಲೇ ಉಪಗ್ರಹ
ಟೀವಿ, ಏಷಿಯಾಡ್‌ಗಳನ್ನ ಹೊತ್ತು
ಏರುತ್ತಿರುವ ಬೆಲೆಗಳಲ್ಲಿ
ಆಳಕ್ಕೆ ಇಳಿದ ಈ ಅಸ್ಥಿಪಂಜರಗಳು
ಯೋಜನೆಗಳ ಬೆನ್ನತ್ತಿ
ಹಿಡಿಯಲೊರಟಿರುವ ಮರೀಚಿಕೆ.

## ಸ್ಫೂರ್ತಿ

ಕಣ್ಣೀರ ಬಿಸಿಯಲ್ಲಿ
ರಕ್ತದ ಕೆಂಪಲ್ಲಿ
ಬೆವರಿನ ಕುದಿಯಲ್ಲಿ
ಹಸಿ ಹಸಿ ಹಾಳೆಗಳ
ಮೇಲೆ ಸುಡುವ
ಮಸಿ ಇಳಿಸಿ
ಸಿಡಿ ಮದ್ದಿನ ಸೃಷ್ಟಿಗೆ
ಕಾರಣವಾಗುತ್ತದೆ.

## ಪ್ರತಿನಿಧಿಗಳು

ಮಾತಿನ ಮೋಡಿಯಿಂದ
ಹುಸಿ ಮಳೆ ಸುರಿಸಿ
ಮುಗ್ಧ ಮನಗಳ ಹಸಿ ಮಾಡಿ
ಸ್ವಾರ್ಥದ ಬೆಳೆ ತೆಗೆದು
ಚುನಾವಣೆ ಬಂದಾಗ
ಮನೆ ಮನೆಗೆ ಬರುವ,
ಜನತೆಯ ಇಚ್ಛೆಯನ್ನ ತುಳಿದು
ಅಧಿಕಾರಕ್ಕಾಗಿ ಪಕ್ಷ ಅದಲಿ-ಬದಲಿ
ಮಾಡುವ ಆಷಾಢಭೂತಿಗಳು.

## ನನ್ನ ಜನ

ಹಸಿವನ್ನುಂಡು
ಕಣ್ಣೀರನ್ನ ಕುಡಿದು
ಬಿಸಿಗಾಳಿ ಉಸುರಿ
ಜ್ವಾಲೆ ಹೊತ್ತು ನಾಳೆಗಾಗಿ
ಕೂಗುತ್ತಾ ಬರುವ
ಅಸ್ಥಿಪಂಜರಗಳು



ಬಳ್ಳಾರಿ ಜಿಲ್ಲೆಯ ಕೊಟ್ಟೂರಿನವರಾದ ಶ್ರೀ ಎನ್. ಎಂ. ಕೊಟ್ರೇಶ್ ರವರು, ಅರ್ಥಶಾಸ್ತ್ರದಲ್ಲಿ ಪದವೀಧರರಾಗಿದ್ದು ಹೂವಿನಹಡಗಲಿಯ ತಾಲೂಕು ಕಛೇರಿಯಲ್ಲಿ ಸ್ಟ್ಯಾಟಿಸ್ಟಿಕಲ್ ಇನ್ಸ್‌ಪೆಕ್ಟರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಎಡ ಪಂಥೀಯ ಧೋರಣೆಯ ಇವರ ಕಾವ್ಯಗಳಲ್ಲಿ ನಾವು ಶೋಷಣಾ ವಿರೋಧಿ ನಿಲುವನ್ನ ಗುರುತಿಸಬಹುದು. ದುಡಿಯುವ ವರ್ಗದ ಪರವಾದ ಮತ್ತು ವಾಸ್ತವಕ್ಕೆ ಹತ್ತಿರವಾದ "ಈ ಕಾವ್ಯಗಳು" ಇವರ ಮೊದಲ ಕವನ ಸಂಕಲನ.

ಬಂಡಾಯ ಸಾಹಿತ್ಯ ಬೆಳೆದು ಬರುತ್ತಿರುವ ಈ ದಿನಗಳಲ್ಲಿ ಶ್ರೀ ಕೊಟ್ರೇಶ್ ರವರ ಕೃತಿ ಆಶಾದಾಯಕವೆನಿಸುತ್ತದೆ. ಓದುಗರು ಇದನ್ನ ಆತ್ಮೀಯವಾಗಿ ಸ್ವಾಗತಿಸುತ್ತಾರೆಂದು ತಿಳಿದು, ಇವರಿಂದ ಇನ್ನೂ ಉತ್ತಮವಾದ ಕೃತಿಗಳನ್ನು ನಿರೀಕ್ಷಿಸುತ್ತೇವೆ.



ಶ್ರೀಹರ್ಷ ಪ್ರಕಾಶನ, ಕೊಟ್ಟೂರು.



ಈ ಲೇಖಕರ ಮುಂದಿನ ಕೃತಿ

**ಕೊರಳೆತ್ತಿದ ಧ್ವನಿಗಳು**

(ಕಥಾ ಸಂಕಲನ)

ಸದ್ಯದಲ್ಲೇ ಹೊರಬರಲಿದೆ